# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಎಂ. ಎಲ್. ಅನಿಲ್ ಕುಮಾರ್

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1253

ಉತ್ತರಿಸಬೇಕಾದ ದಿನಾಂಕ : 08.03.2022

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಇಲಾಖೆಯಿಂದ ವಿವಿಧ ಸಹಕಾರ ಸಂಘ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ಹಾಗೂ ಇನ್ನಿತರ ಸಹಕಾರ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸಂಘದ ಚುನಾವಣೆಯ ಮಾನದಂಡವೇನು; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿನ ಸಹಕಾರ ಸಂಘಗಳ ಚುನಾವಣೆಗಳನ್ನು ನಡೆಸಲು ಒಂದು ಪ್ರತ್ಯೇಕ ಸಹಕಾರ ಚುನಾವಣಾ ಪ್ರಾಧಿಕಾರ ರಚನೆಯಾಗಿದ್ದು, ಇದಕ್ಕೆ ಸಹಕಾರ ಚುನಾವಣಾ ಆಯುಕ್ತರು ಮುಖ್ಯಸ್ಥರಾಗಿರುತ್ತಾರೆ.<br>ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39-Aರಡಿ ಸಹಕಾರ ಸಂಘಗಳ ಆಡಳಿತ ಮಂಡಳಿ ಚುನಾವಣೆಗಳನ್ನು ನಡೆಸಲಾಗುತ್ತಿದೆ.<br>ಸಹಕಾರ ಚುನಾವಣಾ ಪ್ರಾಧಿಕಾರವು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿ 1960ರ ನಿಯಮ 13-BB ರೀತ್ಯ ಚುನಾವಣಾಧಿಕಾರಿಗಳನ್ನು ನೇಮಕ ಮಾಡುವ ಮೂಲಕ ಚುನಾವಣೆಗಳನ್ನು ನಡೆಸಲು ಕ್ರಮವಿಡುತ್ತದೆ.<br>ಹೀಗೆ ನೇಮಕವಾದ ಚುನಾವಣಾಧಿಕಾರಿ ಹಾಗೂ ರಿಟರ್ನಿಂಗ್ ಅಧಿಕಾರಿಗಳು ನಿಯಮ 13-D, 13-E, 13-F ಮತ್ತು ನಿಯಮ 14 ರಂತೆ ಚುನಾವಣೆ ನಡೆಸಲು ಕ್ರಮ ಕೈಗೊಳ್ಳುತ್ತಾರೆ. |
| ಆ) | ಸಂಘಗಳ ಚುನಾವಣೆಯಲ್ಲಿ ಚುನಾವಣೆಗಾಗಿ ಖರ್ಚಾಗುತ್ತಿರುವ ವೆಚ್ಚಗಳು ಎಷ್ಟು; ಕಳೆದ ಮೂರು ವರ್ಷಗಳಿಂದ ಸಹಕಾರ ಇಲಾಖೆಯ ಚುನಾವಣೆಯಲ್ಲಿ ಪ್ರತಿ ಜಿಲ್ಲೆಯಲ್ಲಿ ಚುನಾವಣೆಗಾಗಿ ಇಲಾಖೆಯಿಂದ ಖರ್ಚಾಗಿರುವ ವೆಚ್ಚವೆಷ್ಟು; (ಮಾಹಿತಿ ಒದಗಿಸುವುದು) | ಸಹಕಾರ ಇಲಾಖೆಯು ಸಹಕಾರ ಸಂಸ್ಥೆಗಳ ಚುನಾವಣೆಗಾಗಿ ಯಾವುದೇ ವೆಚ್ಚವನ್ನು ಭರಿಸುವುದಿಲ್ಲ. ಸಹಕಾರ ಸಂಘಗಳು ಸ್ವಾಯತ್ತ ಸಂಸ್ಥೆಗಳಾಗಿದ್ದು ಅವುಗಳ ಚುನಾವಣಾ ವೆಚ್ಚವನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39-B ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿಗಳು 1960ರ ನಿಯಮ 14-AA ರಲ್ಲಿನ ಅವಕಾಶಗಳಂತೆ ಆಯಾ ಸಂಸ್ಥೆಗಳೇ ವೆಚ್ಚವನ್ನು ಭರಿಸಬೇಕಾಗಿರುತ್ತವೆ.<br>ಚುನಾವಣಾ ಪ್ರಾಧಿಕಾರವು ಚುನಾವಣಾ ವೆಚ್ಚದ ಕುರಿತು ಸುತ್ತೋಲೆ ಸಂಖ್ಯೆ: ಸಚುಪ್ರಾ/ಆಡಳಿತ/ ಚು.ಸಂ/29/2021-22, ದಿ:18.12.2021 ರಲ್ಲಿ ನಿರ್ದೇಶನ ನೀಡಿರುತ್ತದೆ. ಸುತ್ತೋಲೆಯನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಇ) | ಸಹಕಾರಿ ಚುನಾವಣೆಯಲ್ಲಿ ಅಗತ್ಯಕ್ಕಿಂತ ಹೆಚ್ಚು ಅಧಿಕಾರಿಗಳನ್ನು/ ಪೋಲೀಸ್ ಗಳನ್ನು ನಿಯೋಜಿಸುವ ಉದ್ದೇಶವೇನು; ಇದರಿಂದ ಇಲಾಖೆಗೆ ಖರ್ಚು ವೆಚ್ಚದ ಹೊರೆಯಾಗುತ್ತಿಲ್ಲವೆ (ಮಾಹಿತಿ ನೀಡುವುದು) | ಚುನಾವಣೆ ನಡೆಯುವ ಸಂಘಗಳ ಕಾರ್ಯವ್ಯಾಪ್ತಿ ಸದಸ್ಯರ ಸಂಖ್ಯೆ ಮತ್ತು ಸ್ಥಳೀಯ ಪರಿಸ್ಥಿತಿಗೆ ಅನುಗುಣವಾಗಿ ಚುನಾವಣಾ ಪ್ರಾಧಿಕಾರದಿಂದ ನೇಮಿಸಲ್ಪಟ್ಟ ಚುನಾವಣಾ ಅಧಿಕಾರಿಗಳು/ ರಿಟರ್ನಿಂಗ್ ಅಧಿಕಾರಿಗಳು, ಚುನಾವಣೆಗೆ ಅಗತ್ಯವಿರುವ ಅಧಿಕಾರಿಗಳು/ಸಿಬ್ಬಂದಿಗಳನ್ನು ಹಾಗೂ ಬಂದೋಬಸ್ತ್‌ಗಾಗಿ ಪೋಲೀಸ್ ಅಧಿಕಾರಿ/ಸಿಬ್ಬಂದಿಗಳನ್ನು ನಿಯೋಜಿಸಿಕೊಳ್ಳುತ್ತಾರೆ.<br>ಚುನಾವಣಾ ವೆಚ್ಚವನ್ನು ಸಹಕಾರ ಸಂಸ್ಥೆಗಳೇ ಭರಿಸುತ್ತಿದ್ದು, ಇಲಾಖೆಯು ಯಾವುದೇ ವೆಚ್ಚ ಭರಿಸದ ಕಾರಣ, ಚುನಾವಣಾ ವೆಚ್ಚವು ಹೊರೆಯಾಗುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಿಒ 23 ಸಿಎಲ್‌ಎಮ್ 2022 (ಇ)

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು

ಅನುಬಂಧ -



# ಸಹಕಾರ ಚುನಾವಣಾ ಪ್ರಾಧಿಕಾರ

ಟಿ.ಟಿ.ಎಂ.ಸಿ. ಕಟ್ಟಡ, 3ನೇ ಮಹಡಿ, ಎ-ಬ್ಲಾಕ್, ಶ್ರೀ ಕೆಂಗಲ್ ಹನುಮಂತಯ್ಯ ರಸ್ತೆ, ಶಾಂತಿನಗರ, ಬೆಂಗಳೂರು-560027

E-mail : coea-coop@karnataka.gov.in

Web site : coea.karnataka.gov.in
Phone : 080-22220066 / 29709014

ಸಂಖ್ಯೆ: ಸಚುಪ್ರಾ/ಆಡಳಿತ/ಚು.ಸಂ/29/2021-22

ದಿನಾಂಕ 18.12.2021

ವಿಷಯ:- ಸಹಕಾರ ಸಂಘಗಳ/ ಸೌಹಾರ್ದ ಸಹಕಾರಿಗಳ ಆಡಳಿತ ಮಂಡಲಿಗಳಿಗೆ / ಪದಾಧಿಕಾರಿಗಳ ಆಯ್ಕೆಗಳಿಗಾಗಿ ನಡೆಯುವ ಚುನಾವಣೆಗಳಲ್ಲಿ ರಿಟರ್ನಿಂಗ್ ಅಧಿಕಾರಿ, ಮತಗಟ್ಟೆ ಅಧಿಕಾರಿಗಳು, ಪರಿಶೀಲನಾಧಿಕಾರಿಗಳು ಮತ್ತು ಇತರ ಚುನಾವಣಾ ಸಿಬ್ಬಂದಿಗಳಿಗೆ ನೀಡುವ ಸಂಭಾವನೆಯನ್ನು ಪರಿಷ್ಕರಿಸುವ ಬಗ್ಗೆ.

ಉಲ್ಲೇಖ :-
1) ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ : ಆರ್.ಎಸ್.ಆರ್/ಚು.ಸಂಭಾವನೆ/187/2009-10 ದಿನಾಂಕ 20.01.2010.
2) ಈ ಕಛೇರಿಯ ಆದೇಶ ಸಂಖ್ಯೆ : ಸಚುಆ/ಚುನಾವಣೆ ಸಂಭಾವನೆ/11/2013-14 ದಿನಾಂಕ 25.07.2013.
3) ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ : ರಾಚುಆ/56/ಇಯುಬಿ/ 2018 ಬೆಂಗಳೂರು, ದಿನಾಂಕ 06.08.2018.

★★★★★

**ಪ್ರಸ್ತಾವನೆ :-**

ಸಹಕಾರ ಸಂಘಗಳಿಗೆ / ಸೌಹಾರ್ದ ಸಹಕಾರಿಗಳ ಆಡಳಿತ ಮಂಡಲಿಗಳಿಗೆ ನಡೆಯುವ ಚುನಾವಣೆ ಮತ್ತು ಪದಾಧಿಕಾರಿಗಳ ಆಯ್ಕೆಗಳಿಗಾಗಿ ನಡೆಯುವ ಚುನಾವಣೆಗಳಿಗೆ ಸಂಬಂಧಿಸಿದಂತೆ ಸದರಿ ಚುನಾವಣೆಗಳಲ್ಲಿ ರಿಟರ್ನಿಂಗ್ ಅಧಿಕಾರಿ / ಸಹಾಯಕ ರಿಟರ್ನಿಂಗ್ ಅಧಿಕಾರಿ ಹಾಗೂ ಮತಗಟ್ಟೆ ಸಿಬ್ಬಂದಿಯಾಗಿ ಕರ್ತವ್ಯ ನಿರ್ವಹಿಸುವ ಅಧಿಕಾರಿ / ನೌಕರರಿಗೆ ಉಲ್ಲೇಖ(1)ರಂತೆ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರು ಪಾವತಿಸಬೇಕಾದ ಸಂಭಾವನೆ, ಪ್ರವಾಸ ಭತ್ಯೆ ಹಾಗೂ ದಿನಭತ್ಯೆ ಕುರಿತಂತೆ ಸುತ್ತೋಲೆಯನ್ನು ಹೊರಡಿಸಿದ್ದು ಸರಿಯಷ್ಟೆ.

ನಂತರ, ದಿನಾಂಕ 18.03.2013 ರಲ್ಲಿ ಕರ್ನಾಟಕ ರಾಜ್ಯ ಸಹಕಾರ ಚುನಾವಣಾ ಆಯೋಗವು ಅಸ್ತಿತ್ವಕ್ಕೆ ಬಂದಿದ್ದು, ಉಲ್ಲೇಖ(2)ರಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ಕ್ಕೆ 2012ರಲ್ಲಿ ಮಾಡಲಾದ ತಿದ್ದುಪಡಿಯನ್ವಯ ಪ್ರಕರಣ 39ಎ ರೀತ್ಯಾ ಹಾಗೂ ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ 1997ರ ಪ್ರಕರಣ 26ರ ರೀತ್ಯಾ ಸಹಕಾರ ಸಂಘಗಳಿಗೆ / ಸೌಹಾರ್ದ ಸಹಕಾರಿಗಳಿಗೆ ನಡೆಯುವ ಆಡಳಿತ ಮಂಡಲಿ ಚುನಾವಣೆ ಹಾಗೂ ಪದಾಧಿಕಾರಿಗಳ ಚುನಾವಣೆಯನ್ನು ಸಹಕಾರ ಚುನಾವಣಾ ಆಯೋಗದ ಅಧೀಕ್ಷಣೆ, ನಿಯಂತ್ರಣ ಹಾಗೂ ನಿರ್ದೇಶನದನ್ವಯ ನಡೆಸುವುದರಿಂದ ಮತದಾರರ ಪಟ್ಟಿ ಸಿದ್ಧಪಡಿಸುವಿಕೆ, ಪ್ರವಾಸ ಮತ್ತು ಇತರೆ ಭತ್ಯೆಗಳು, ರಿಟರ್ನಿಂಗ್ ಅಧಿಕಾರಿ, ಸಹಾಯಕ ರಿಟರ್ನಿಂಗ್ ಅಧಿಕಾರಿ, ಅಧ್ಯಕ್ಷಾಧಿಕಾರಿ ಮತ್ತು ಇನ್ನಿತರ ಮತಗಟ್ಟೆ ಸಿಬ್ಬಂದಿಗೆ ಪಾವತಿಸಬೇಕಾದ ಸಂಭಾವನೆಯನ್ನು ಸಹಕಾರ ಚುನಾವಣಾ ಆಯೋಗವು ಗೊತ್ತುಪಡಿಸಿ ದಿನಾಂಕ 25.07.2013ರಲ್ಲಿ ಆದೇಶವನ್ನು ಹೊರಡಿಸಿರುತ್ತದೆ.

ಕೇಂದ್ರ ಚುನಾವಣಾ ಆಯೋಗವು 2018ರ ವಿಧಾನಸಭಾ ಸಾರ್ವತ್ರಿಕ ಚುನಾವಣೆಯಲ್ಲಿ ಚುನಾವಣಾ ಕರ್ತವ್ಯ ನಿರ್ವಹಿಸುವ ಅಧಿಕಾರಿ/ ಸಿಬ್ಬಂದಿಗಳಿಗೆ ನೀಡುವ ಸಂಭಾವನೆಯನ್ನು ಪರಿಷ್ಕರಿಸಿರುವ ಹಿನ್ನೆಲೆಯಲ್ಲಿ ಉಲ್ಲೇಖ(3)ರಲ್ಲಿ ಕರ್ನಾಟಕ ರಾಜ್ಯ ಚುನಾವಣಾ ಆಯೋಗವು ರಾಜ್ಯದಲ್ಲಿ ಜರುಗಲಿರುವ ನಗರ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ ಚುನಾವಣಾ ಕರ್ತವ್ಯಕ್ಕೆ ನೇಮಿಸಲ್ಪಡುವ ವಿವಿಧ ಹಂತಗಳ ಅಧಿಕಾರಿ/ಸಿಬ್ಬಂದಿಗಳಿಗೆ ನೀಡುವ ಸಂಭಾವನೆಯನ್ನು ಪರಿಷ್ಕರಿಸಿ ಆದೇಶಿಸಲಾಗಿರುತ್ತದೆ.

ಅದರಂತೆ, ಪ್ರಾಧಿಕಾರದಿಂದ ಉಲ್ಲೇಖ(2)ರ ಚುನಾವಣಾ ಸಂಭಾವನೆಯ ಆದೇಶವನ್ನು ಹೊರಡಿಸಿ ಈಗಾಗಲೇ 8 ವರ್ಷಗಳು ಗತಿಸಿರುವುದರಿಂದ, ಇತ್ತೀಚಿನ ಜೀವನಾವಶ್ಯಕ ಅಗತ್ಯ ವಸ್ತುಗಳು / ಗ್ರಾಹಕ ವಸ್ತುಗಳು / ಪ್ರಯಾಣದರ ಏರಿಕೆಯನ್ನು ಗಮನದಲ್ಲಿಟ್ಟುಕೊಂಡು ರಿಟರ್ನಿಂಗ್ ಅಧಿಕಾರಿ / ಸಹಾಯಕ ರಿಟರ್ನಿಂಗ್ ಅಧಿಕಾರಿ / ಮತಗಟ್ಟೆ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಈ ಕಛೇರಿಯ ಆದೇಶದಂತೆ ನೀಡುತ್ತಿರುವ ಸಂಭಾವನೆಯನ್ನು ಪರಿಷ್ಕರಿಸುವ ಅವಶ್ಯಕತೆ ಇದೆ ಎಂಬುದನ್ನು ಮನಗಂಡು, ಸಂಭಾವನೆಯನ್ನು ಪರಿಷ್ಕರಿಸುವ ಕುರಿತು ಈ ಕೆಳಕಂಡಂತೆ ಆದೇಶಿಸಲಾಗಿದೆ.

## ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಬಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 14ಎಎ ರೀತ್ಯಾ ಸಹಕಾರ ಚುನಾವಣಾ ಪ್ರಾಧಿಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಎನ್.ಎಸ್. **ಚನ್ನಪ್ಪಗೌಡ, ಆಯುಕ್ತರು, ಸಹಕಾರ ಚುನಾವಣಾ ಪ್ರಾಧಿಕಾರ, ಬೆಂಗಳೂರು** ಆದ ನಾನು, ಸಹಕಾರ ಸಂಘಗಳ/ಸೌಹಾರ್ದ ಸಹಕಾರಿಗಳ ಆಡಳಿತ ಮಂಡಳಿ / ಪದಾಧಿಕಾರಿಗಳ ಚುನಾವಣೆಗಳ ಸಂಬಂಧ ನೇಮಕವಾಗುವ ರಿಟರ್ನಿಂಗ್ ಅಧಿಕಾರಿ / ಸಹಾಯಕ ರಿಟರ್ನಿಂಗ್ ಅಧಿಕಾರಿ, ಮತಗಟ್ಟೆ ಅಧಿಕಾರಿ / ಸಿಬ್ಬಂದಿಗಳಿಗೆ / ಪರಿಶೀಲನಾಧಿಕಾರಿಗೆ ನೀಡಬೇಕಾದ ಸಂಭಾವನೆಯನ್ನು ಈ ಕೆಳಗಿನಂತೆ ಪರಿಷ್ಕರಿಸಿ ಆದೇಶಿಸಿರುತ್ತೇನೆ. ಈ ಆದೇಶವು ಕೂಡಲೇ ಜಾರಿಗೆ ಬಂದಿದ್ದು, ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

**(ಅ). ಆಡಳಿತ ಮಂಡಲಿ ಸಾಮಾನ್ಯ ಚುನಾವಣೆ ಮತ್ತು ತತ್ಪರಿಣಾಮದ ಪದಾಧಿಕಾರಿಗಳ ಚುನಾವಣೆಯ ಪರಿಷ್ಕೃತ ಚುನಾವಣಾ ಸಂಭಾವನೆ.** (ರೂ.ಗಳಲ್ಲಿ)

| ಕ್ರಮ ಸಂಖ್ಯೆ | ವರ್ಗ | ಸಂಘದಲ್ಲಿನ ಅರ್ಹ ಬಿಡಿ ಸದಸ್ಯರ ಸಂಖ್ಯೆ | ರಿಟರ್ನಿಂಗ್ ಅಧಿಕಾರಿ | ಸಹಾಯಕ ರಿಟರ್ನಿಂಗ್ ಅಧಿಕಾರಿ | ಅಧ್ಯಕ್ಷಾಧಿಕಾರಿ | ಮತಗಟ್ಟೆ ಅಧಿಕಾರಿ / ಸಿಬ್ಬಂದಿ | ಸಹಾಯಕ 'ಡಿ' ಗ್ರೂಪ್ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಪ್ರಾಥಮಿಕ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | 1000 ಕ್ಕಿಂತ ಕಡಿಮೆ | 1500 | 900 | 850 | 750 | 500 |
| | | 1000 ರಿಂದ 2500 ರವರೆಗೆ | 2000 | 1000 | 850 | 750 | 500 |
| | | 2500 ರಿಂದ 5000 ರವರೆಗೆ | 2500 | 1500 | 850 | 750 | 500 |
| | | 5000 ಹಾಗೂ ಮೇಲ್ಪಟ್ಟು | 3000 | 2000 | 850 | 750 | 600 |
| 2 | ಮಾಧ್ಯಮಿಕ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | 3000 ಕ್ಕಿಂತ ಕಡಿಮೆ | 3500 | 2500 | 1500 | 1000 | 750 |
| | | 3000 ಕ್ಕೆ ಮೇಲ್ಪಟ್ಟು | 4000 | 3000 | 1500 | 1000 | 750 |
| 3 | ಫೆಡರಲ್ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | – | 4500 | 3000 | 2000 | 1500 | 750 |
| 4 | ಅಪೆಕ್ಸ್ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | – | 5000 | 5000 | 2000 | 1500 | 750 |

ಮೇಲ್ಕಂಡ ಕೋಷ್ಟಕದಲ್ಲಿ ನಮೂದಿಸಿರುವ ಸಂಭಾವನೆಯು ಒಂದು ಸಹಕಾರ ಸಂಘ/ ಸೌಹಾರ್ದ ಸಹಕಾರಿಯ ಪೂರ್ಣ ಚುನಾವಣೆ ಪ್ರಕ್ರಿಯೆಯನ್ನು ಕೈಗೊಳ್ಳಲು ನಿಗದಿಪಡಿಸಿರುವ ಒಟ್ಟು (ಇಡಿಗಂಟು) ಮೊತ್ತವಾಗಿರುತ್ತದೆ.

(ಆ). ಮುಂದುವರೆದು, ಚುನಾವಣೆ ಪ್ರಕ್ರಿಯೆಯಲ್ಲಿ ಮತದಾನದ ನಂತರ ನಡೆಯುವ ಮತ ಎಣಿಕೆ ಕಾರ್ಯಕ್ಕೆ ನಿಯೋಜಿಸಲ್ಪಡುವ ಚುನಾವಣಾ ಸಿಬ್ಬಂದಿಗಳು ಹಾಗೂ ರಿಟರ್ನಿಂಗ್ ಅಧಿಕಾರಿ/ ಸಹಾಯಕ ರಿಟರ್ನಿಂಗ್ ಅಧಿಕಾರಿ ಈ ಕೆಳಕಂಡಂತೆ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

(ರೂ.ಗಳಲ್ಲಿ)

| ಕ್ರಮ ಸಂಖ್ಯೆ | ವರ್ಗ | ರಿಟರ್ನಿಂಗ್ ಅಧಿಕಾರಿ | ಸಹಾಯಕ ರಿಟರ್ನಿಂಗ್ ಅಧಿಕಾರಿ | ಮತ ಎಣಿಕೆ ಅಧಿಕಾರಿ / ಸಿಬ್ಬಂದಿ | ಸಹಾಯಕ 'ಡಿ' ಗ್ರೂಪ್ |
|---|---|---|---|---|---|
| 1 | 2 | 3 | 4 | 5 | 6 |
| 1 | ಪ್ರಾಥಮಿಕ/ ಮಾಧ್ಯಮಿಕ/ ಫೆಡರಲ್/ ಅಪೆಕ್ಸ್ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | 1000 | 600 | 500 | 300 |

1) ಅಲ್ಲದೆ ರಿಟರ್ನಿಂಗ್ ಅಧಿಕಾರಿ/ ಸಹಾಯಕ ರಿಟರ್ನಿಂಗ್ ಅಧಿಕಾರಿ ಹಾಗೂ ಇತರೆ ಚುನಾವಣಾ ಕಾರ್ಯನಿರತ ಸಿಬ್ಬಂದಿಗಳು ಕೆ.ಸಿ.ಎಸ್.ಆರ್. ರೀತ್ಯಾ ಪ್ರವಾಸಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

2) ಆದರೆ ರಿಟರ್ನಿಂಗ್ ಅಧಿಕಾರಿ/ ಸಹಾಯಕ ರಿಟರ್ನಿಂಗ್ ಅಧಿಕಾರಿ ರವರುಗಳು ಚುನಾವಣಾ ವೇಳಾ ಪಟ್ಟಿಯಲ್ಲಿ ನಿಗದಿಪಡಿಸಿರುವ ಕಾರ್ಯಗಳನ್ನು ಕೈಗೊಳ್ಳಲು ಮಾತ್ರ ಚುನಾವಣಾ ವೇಳಾ ಪಟ್ಟಿಯಲ್ಲಿನ ಅವಧಿಗೆ ಸೀಮಿತವಾಗಿ ಕೆ.ಸಿ.ಎಸ್.ಆರ್. ರೀತ್ಯಾ ಪ್ರವಾಸ ಭತ್ಯೆ ಮತ್ತು ದಿನ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

3) ಇತರೆ ಚುನಾವಣಾ ಕಾರ್ಯನಿರತ ಸಿಬ್ಬಂದಿಗಳು ಚುನಾವಣೆ ನಡೆಯುವ ದಿನಕ್ಕೆ ಮಾತ್ರ ಕೆ.ಸಿ.ಎಸ್.ಆರ್. ರೀತ್ಯಾ ಪ್ರವಾಸ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

4) ಚುನಾವಣಾ ಕೆಲಸ ನಿರ್ವಹಿಸುವ ಸಿಬ್ಬಂದಿಗೆ ಸಂಭಾವನೆ, ಪ್ರವಾಸ ಭತ್ಯೆ ಹಾಗೂ ದಿನಭತ್ಯೆಯನ್ನು ಸಂಬಂಧಿಸಿದ ಸಹಕಾರ ಸಂಘ/ ಸೌಹಾರ್ದ ಸಹಕಾರಿಯು ಭರಿಸತಕ್ಕದಾಗಿದೆ.

5) ಪರಿಷ್ಕರಿಸಿರುವ ದರದಂತೆ ಪಡೆಯುವ ಸಂಭಾವನೆ/ ಪ್ರವಾಸ ಭತ್ಯೆ/ ದಿನಭತ್ಯೆಯನ್ನು ಹೊರತುಪಡಿಸಿ ಇನ್ಯಾವುದೇ ರೂಪದಲ್ಲಿ ಸಂಭಾವನೆಯನ್ನು ಸಹಕಾರ ಸಂಘ/ ಸೌಹಾರ್ದ ಸಹಕಾರಿಗಳಿಂದ ಪಡೆಯುವಂತಿಲ್ಲ.

6) ರಿಟರ್ನಿಂಗ್ ಅಧಿಕಾರಿರವರು ಮತದಾನದ ಹಕ್ಕನ್ನು ಹೊಂದಿರುವ ಸುಮಾರು 500 ಅರ್ಹ ಸದಸ್ಯರಿಗೆ ಅನ್ವಯವಾಗುವಂತೆ ಒಂದು ಮತಗಟ್ಟೆರಂತೆ ಮತಗಟ್ಟೆಗಳನ್ನು ಸಿದ್ಧಪಡಿಸುವುದು.

(ಇ). ಆಕಸ್ಮಿಕವಾಗಿ ತೆರವಾಗುವ ಪದಾಧಿಕಾರಿಗಳ ಸ್ಥಾನಗಳಿಗೆ ನಡೆಯುವ ಪದಾಧಿಕಾರಿಗಳ ಚುನಾವಣೆಯ ಸಂಬಂಧ ರಿರ್ಟನಿಂಗ್ ಅಧಿಕಾರಿ ಈ ಕೆಳಕಂಡಂತೆ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

(ರೂ.ಗಳಲ್ಲಿ)

| ಕ್ರಮ ಸಂಖ್ಯೆ | ವರ್ಗ | ಪದಾಧಿಕಾರಿಗಳ ಚುನಾವಣೆ ಸಂಬಂಧ ರಿರ್ಟನಿಂಗ್ ಅಧಿಕಾರಿಯ ಸಂಭಾವನೆ. |
|---|---|---|
| 1 | 2 | 3 |
| 1 | ಪ್ರಾಥಮಿಕ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | 1000 |
| 2 | ಮಾಧ್ಯಮಿಕ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | 1500 |
| 3 | ಫೆಡರಲ್ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | 2000 |
| 4 | ಅಪೆಕ್ಸ್ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | 2500 |

ಮೇಲ್ಕಂಡಂತೆ ರಿಟರ್ನಿಂಗ್ ಅಧಿಕಾರಿ/ ಸಹಾಯಕ ರಿಟರ್ನಿಂಗ್ ಅಧಿಕಾರಿ/ ಚುನಾವಣಾ ಕಾರ್ಯನಿರತ ಸಿಬ್ಬಂದಿಗಳಿಗೆ ನಿಗದಿಪಡಿಸಿರುವ ಸಂಭಾವನೆ / ಭತ್ಯೆಗಳನ್ನು ಹೊರೆತುಪಡಿಸಿ ಬೇರೆ ಯಾವುದೇ ರೀತಿಯಲ್ಲಿ ನಗದು ಮೊತ್ತವನ್ನು ಪಾವತಿಸಿದಲ್ಲಿ, ಸದರಿ ಸಂಘದ ಮುಖ್ಯ ಕಾರ್ಯನಿರ್ವಹಣಾಧಿಕಾರಿಯನ್ನು ಜವಾಬ್ದಾರರನ್ನಾಗಿ ಮಾಡಲಾಗುವುದು. ರಿಟರ್ನಿಂಗ್ ಅಧಿಕಾರಿ/ ಸಹಾಯಕ ರಿಟರ್ನಿಂಗ್ ಅಧಿಕಾರಿರವರು ನಿಗದಿಪಡಿಸಿರುವ ಮೊತ್ತಕ್ಕಿಂತ ಹೆಚ್ಚುವರಿ ಕ್ಲೇಂ ಮಾಡಿದ್ದಲ್ಲಿ, ಸದರಿ ಮೊತ್ತವನ್ನು ಪಾವತಿಸಲು ಕ್ರಮ ಕೈಗೊಂಡಿರುವ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಕ್ರಮವನ್ನು ಅನುಮೋದಿಸುವ ಆಡಳಿತ ಮಂಡಳಿಯು ಸಹ ನೇರವಾಗಿ ಹೊಣೆಗಾರರಾಗುತ್ತಾರೆ.

(ಈ). ಪ್ರಾಥಮಿಕ, ಮಾಧ್ಯಮಿಕ, ಫೆಡರಲ್, ಹಾಗೂ ಅಪೆಕ್ಸ್ ಸಹಕಾರ ಸಂಘ/ ಸೌಹಾರ್ದ ಸಹಕಾರಿಗಳ ಚುನಾವಣೆಗೆ ಸಂಬಂಧಿಸಿದಂತೆ <u>ಮತದಾರರ ಪಟ್ಟಿ / ಭರ್ತಿ ಮಾಡಿರುವ ಡೆಲಿಗೇಟ್ ನಮೂನೆಗಳ ಪರಿಶೀಲನೆಗೆ</u> ಪರಿಶೀಲನಾಧಿಕಾರಿಯಾಗಿ ನೇಮಕ ಮಾಡಲ್ಪಡುವ ಅಧಿಕಾರಿ/ ಸಿಬ್ಬಂದಿ ಈ ಕೆಳಕಂಡಂತೆ ಸಂಭಾವನೆಯನ್ನು ಒಟ್ಟು (**ಇಡಿಗಂಟು**) ಮೊತ್ತವಾಗಿ ಪಡೆಯಲು ಅರ್ಹರಿರುತ್ತಾರೆ.

(ರೂ.ಗಳಲ್ಲಿ)

| ಕ್ರಮ ಸಂಖ್ಯೆ | ವರ್ಗ | ಸಂಘದ /ಸಹಕಾರಿಯ ಸದಸ್ಯರ ಸಂಖ್ಯೆ | ಸಂಭಾವನೆ |
|---|---|---|---|
| 1 | ಪ್ರಾಥಮಿಕ ಸಹಾರ ಸಂಘಗಳು / ಸೌಹಾರ್ದ ಸಹಕಾರಿಗಳು | 1000 ಕ್ಕಿಂತ ಕಡಿಮೆ | 1000 |
| | | 1000 ರಿಂದ 4000 ರವರೆಗೆ | 2500 |
| | | 4000 ಕ್ಕಿಂತ ಮೇಲ್ಪಟ್ಟು | 3000 |
| 2 | ಮಾಧ್ಯಮಿಕ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | | 3500 |
| 3 | ಫೆಡರಲ್ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | | 4000 |
| 4 | ಅಪೆಕ್ಸ್ ಸಹಕಾರ ಸಂಘಗಳು/ ಸೌಹಾರ್ದ ಸಹಕಾರಿಗಳು | | 4500 |

ಪರಿಶೀಲನಾಧಿಕಾರಿಯ ಸಂಭಾವನೆಯನ್ನು ಹೊರತುಪಡಿಸಿ ಇನ್ನಿತರರಿಗೆ ಯಾವುದೇ ಸಂಭಾವನೆಯನ್ನು ನೀಡಲು ಅವಕಾಶವಿರುವುದಿಲ್ಲ. ಒಂದು ಪಕ್ಷ ಚುನಾವಣಾಧಿಕಾರಿಗೆ ಒಂದಕ್ಕಿಂತ ಹೆಚ್ಚು ಪರಿಶೀಲನಾಧಿಕಾರಿಗಳನ್ನು ನೇಮಕ ಮಾಡುವ ಅಗತ್ಯತೆ ಇದ್ದಲ್ಲಿ ಸಹಕಾರ ಚುನಾವಣಾ ಪ್ರಾಧಿಕಾರದ ಪೂರ್ವಾನುಮತಿಯನ್ನು ಪಡೆದು ನೇಮಕ ಮಾಡುವುದು.

ಸಹಕಾರ ಚುನಾವಣಾ ಪ್ರಾಧಿಕಾರದಿಂದ ಜರುಗಲಿರುವ ಸಹಕಾರ ಸಂಘಗಳ / ಸೌಹಾರ್ದ ಸಹಕಾರಿಗಳ ಚುನಾವಣೆಗೆ ಸಂಬಂಧಪಟ್ಟಂತೆ ಸುತ್ತೋಲೆ ಸಂಖ್ಯೆ : ಸಚುಅ/ಚುನಾವಣೆ/8/2014 ದಿನಾಂಕ 18.03.2014ರಲ್ಲಿ ಚುನಾವಣಾ ಕರ್ತವ್ಯಕ್ಕಾಗಿ ನಿಯೋಜಿಸುವ ಪೊಲೀಸ್ ಸಿಬ್ಬಂದಿ / ಅಧಿಕಾರಿಗಳಿಗೆ ಶುಲ್ಕವನ್ನು ಪಾವತಿಸುವ ಸಂಬಂಧ ಸರ್ಕಾರಿ ಆದೇಶ ಸಂಖ್ಯೆ : ಹೆಚ್.ಡಿ/136/ಇ.ಎಫ್.ಎಸ್/2010 ಬೆಂಗಳೂರು, ದಿನಾಂಕ 21.08.2012ರಲ್ಲಿ ಆದೇಶವನ್ನು ಹೊರಡಿಸಲಾಗಿರುತ್ತದೆ. ಮತ್ತು, ಸರ್ಕಾರದ ಆದೇಶ ಸಂಖ್ಯೆ : ಹೆಚ್.ಡಿ/210/ಎಸ್.ಎಸ್.ಟಿ/2016, ಬೆಂಗಳೂರು, ದಿನಾಂಕ 04.03.2014 ಗಳಲ್ಲಿ ತಿಳಿಸಲಾಗಿರುವಂತೆ ಸಹಕಾರ ಸಂಘಗಳ / ಸೌಹಾರ್ದ ಸಹಕಾರಿಗಳ ಚುನಾವಣಾ ಕರ್ತವ್ಯಕ್ಕಾಗಿ ನಿಯೋಜನೆಗೊಳ್ಳುವ ಪೊಲೀಸ್ ಸಿಬ್ಬಂದಿ ಮತ್ತು ಅಧಿಕಾರಿಗಳಿಗೆ ಶುಲ್ಕವನ್ನು ನಿಗದಿಪಡಿಸಿ ಆದೇಶಿಸಲಾಗಿರುತ್ತದೆ. ಅದರಂತೆಯೇ ಚುನಾವಣಾ ಕರ್ತವ್ಯ ನಿರತ ಪೊಲೀಸ್ ಸಿಬ್ಬಂದಿ ಮತ್ತು ಅಧಿಕಾರಿಗಳಿಗೆ ಶುಲ್ಕವನ್ನು ಪಾವತಿಸತಕ್ಕದ್ದು.

ಮುಂದುವರೆದು, ಸಹಕಾರ ಚುನಾವಣಾ ಕೈಪಿಡಿ–2016ರಲ್ಲಿ ತಿಳಿಸಲಾಗಿರುವ ಲೇಖನ ಸಾಮಗ್ರಿ, ಅಂಚೆವೆಚ್ಚ, ಜೆರಾಕ್ಸ್, ಪ್ಯಾಕ್ಸ್, ಮತಪೆಟ್ಟಿಗೆ ಬಾಡಿಗೆ, ಅಳಿಸಲಾಗದ ಶಾಯಿ ಇನ್ನು ಮುಂತಾದ ಸಾಮಗ್ರಿಗಳನ್ನು ನಿಯಮಾನುಸಾರ ಖರೀದಿಸುವುದು ಮತ್ತು ಖರ್ಚು–ವೆಚ್ಚಗಳನ್ನು **ಕರ್ನಾಟಕ ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ–14ಎಎ** ರೀತ್ಯಾ ಆಯಾಯ ಸಂಘಗಳೇ ಭರಿಸತಕ್ಕದ್ದಾಗಿದೆ.

ಈ ಆದೇಶದ ಮೂಲಕ ಪರಿಷ್ಕೃತಗೊಳಿಸಿರುವ ಚುನಾವಣಾ ಸಂಭಾವನೆ ದರವು ಈ ಕೂಡಲೇ ಜಾರಿಗೆ ಬರತಕ್ಕದ್ದು.

(ಡಾ. ಎನ್.ಎಸ್. ಚೆನ್ನಪ್ಪಗೌಡ)
ಆಯುಕ್ತರು,
ಸಹಕಾರ ಚುನಾವಣಾ ಪ್ರಾಧಿಕಾರ,
ಬೆಂಗಳೂರು.

ಇವರಿಗೆ :-

1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಹಕಾರ ಇಲಾಖೆ, ಬಹುಮಹಡಿಗಳ ಕಟ್ಟಡ, 6ನೇ ಮಹಡಿ, ಡಾ: ಬಿ.ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು–01 ಇವರ ಮಾಹಿತಿಗಾಗಿ ಸಲ್ಲಿಸಿದೆ.
2. ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1, ಅಲಿಆಸ್ಕರ್ ರಸ್ತೆ, ಬೆಂಗಳೂರು–52.
3. ಪ್ರಾದೇಶಿಕ ಆಯುಕ್ತರು, ಬೆಂಗಳೂರು/ಮೈಸೂರು/ಬೆಳಗಾವಿ/ಗುಲ್ಬರ್ಗಾ ವಿಭಾಗ ಹಾಗೂ ಅಪೆಕ್ಸ್ ಸಹಕಾರ ಸಂಘಗಳ ಚುನಾವಣಾಧಿಕಾರಿಗಳು.
4. ಸಹಕಾರ ಸಂಘಗಳ ಅಪರ ನಿಬಂಧಕರು, ಪತ್ತು/ ವಸತಿ & ಇತರೆ/ ಬಳಕೆ & ಮಾರಾಟ/ ಕೈಗಾರಿಕೆ & ಹೈನುಗಾರಿಕೆ, ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52.
5. ಸಹಕಾರ ಸಂಘಗಳ ಜಂಟಿ ನಿಬಂಧಕರು, ಪಟ್ಟಣ ಬ್ಯಾಂಕುಗಳ ಕೋಶ/ ಕಾನೂನು ಕೋಶ/ ಐಸಿಡಿಪಿ/ ಆಡಳಿತ & ಅಭಿವೃದ್ಧಿ, ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52.

6. ಸಹಕಾರ ಸಂಘಗಳ ಜಂಟಿ ನಿಬಂಧಕರು ಬೆಂಗಳೂರು/ಮೈಸೂರು/ಬೆಳಗಾವಿ/ಗುಲ್ಬರ್ಗಾ ಪ್ರಾಂತ ಹಾಗೂ ಮಾಧ್ಯಮಿಕ ಸಹಕಾರ ಸಂಘಗಳ ಚುನಾವಣಾಧಿಕಾರಿಗಳು.

7. ರಾಜ್ಯದ ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು ಹಾಗೂ ಫೆಡರಲ್ ಸಹಕಾರ ಸಂಘಗಳ ಚುನಾವಣಾಧಿಕಾರಿಗಳು.

8. ಎಲ್ಲಾ ಜಿಲ್ಲೆಗಳ ಸಹಕಾರ ಸಂಘಗಳ ಉಪ ನಿಬಂಧಕರುಗಳು

9. ರಾಜ್ಯದ ಎಲ್ಲಾ ಜಿಲ್ಲೆಗಳ ಪೊಲೀಸ್ ವರಿಷ್ಠಾಧಿಕಾರಿಗಳಿಗೆ.

10. ಎಲ್ಲಾ ಜಿಲ್ಲೆಗಳ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಜಂಟಿ ನಿರ್ದೇಶಕರುಗಳು/ ಉಪ ನಿರ್ದೇಶಕರುಗಳು.

11. ಎಲ್ಲಾ ಉಪ ವಿಭಾಗಗಳ ಸಹಕಾರ ಸಂಘಗಳ ಸಹಾಯಕ ನಿಬಂಧಕರುಗಳಿಗೆ ಸೂಕ್ತ ಕ್ರಮಕ್ಕಾಗಿ.

12. ಆದೇಶದ ಕಡತ / ರಕ್ಷಾ ಕಡತಕ್ಕೆ.